# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 64 (613) |
| ಸದಸ್ಯರ ಹೆಸರು | : | ಶ್ರೀ ಆರ್. ಬಿ. ತಿಮ್ಮಾಪೂರ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 21-02-2022. |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಶಾಲಾ-ಕಾಲೇಜುಗಳಲ್ಲಿ ಹಿಜಾಬ್ ಅಥವಾ ಶಾಲು ಧರಿಸುವ ಕುರಿತು ಸರ್ಕಾರದ ನಿಲುವೇನು: | **"ಕರ್ನಾಟಕ ಶಿಕ್ಷಣ ಕಾಯ್ದೆ 1983ರ ಕಲಂ 133 ಉಪ ಕಂಡಿಕೆ:(2)" ಹಾಗೂ "ಕಲಂ7(1)(i), 7(2)(g)(v) ಮತ್ತು ಕರ್ನಾಟಕ ಶಿಕ್ಷಣ ಸಂಸ್ಥೆಗಳ(ವರ್ಗೀಕರಣ, ನಿಯಂತ್ರಣ, ಪಠ್ಯಕ್ರಮ ನಿಗದಿಪಡಿಸುವಿಕೆ, ಇತರೆ) ನಿಯಮಗಳು 1995ರ ನಿಯಮ 11ರಲ್ಲಿ"** ಪ್ರದತ್ತವಾಗಿರುವ ಅಧಿಕಾರದಂತೆ ರಾಜ್ಯದ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ಸರ್ಕಾರ ನಿಗಧಿಪಡಿಸಿರುವ ಸಮವಸ್ತ್ರವನ್ನು ಕಡ್ಡಾಯವಾಗಿ ಧರಿಸತಕ್ಕದ್ದು. ಖಾಸಗಿ ಶಾಲೆಗಳು ತಮ್ಮ ಆಡಳಿತ ಮಂಡಳಿಗಳು ನಿರ್ಧರಿಸಿರುವಂತಹ ಸಮವಸ್ತ್ರವನ್ನೇ ಧರಿಸತಕ್ಕದ್ದು.<br><br>ಪದವಿ ಪೂರ್ವ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಕಾಲೇಜುಗಳಲ್ಲಿ ಆಯಾ ಕಾಲೇಜಿನ ಕಾಲೇಜು ಅಭಿವೃದ್ಧಿ ಸಮಿತಿ(CDC) ಅಥವಾ ಆಡಳಿತ ಮಂಡಳಿಯ ಮೇಲ್ವಿಚಾರಣಾ ಸಮಿತಿಯು ನಿರ್ಧರಿಸುವಂತಹ ಸಮವಸ್ತ್ರಗಳನ್ನು ಧರಿಸತಕ್ಕದ್ದು. ಆಡಳಿತ ಮಂಡಳಿಗಳು ಸಮವಸ್ತ್ರಗಳನ್ನು ನಿಗಧಿಪಡಿಸದೇ ಇದ್ದಲ್ಲಿ, ಸಮಾನತೆ ಮತ್ತು ಐಕ್ಯತೆಯನ್ನು ಕಾಪಾಡಿಕೊಂಡು ಹಾಗೂ ಸಾರ್ವಜನಿಕ ಸುವ್ಯವಸ್ಥೆಗೆ ಭಂಗ ಬರದಂತೆ ಇರುವ ಉಡುಪುಗಳನ್ನು ಧರಿಸಿಕೊಳ್ಳತಕ್ಕದ್ದೆಂದು ಸರ್ಕಾರದ ಆದೇಶ ಸಂಖ್ಯೆ:ಇಪಿ/14 /ಎಸ್‌ಹೆಚ್‌ಹೆಚ್/2022 ದಿನಾಂಕ:05-02-2022ರಲ್ಲಿ ಆದೇಶಿಸಿದೆ. |
| ಆ) | ವಿದ್ಯಾ ಸಂಸ್ಥೆಗಳಲ್ಲಿ ಏಕರೂಪ ಸಮವಸ್ತ್ರ ನೀತಿಯನ್ನು ಜಾರಿಗೆ ತರಲು - ಸರ್ಕಾರ ಉದ್ದೇಶಿಸಿದೆಯೇ; | ರಾಜ್ಯದ ಶಾಲಾ-ಕಾಲೇಜುಗಳಲ್ಲಿ ಹಿಜಾಬ್ ಅಥವಾ ಶಾಲು ಧರಿಸುವ ಕುರಿತಂತೆ ಉಡುಪಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿನಿಯರುಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ:2146/2022ನ್ನು ದಾಖಲಿಸಿದ್ದು, ಸದರಿ ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ವಿಚಾರಣೆಯ ಹಂತದಲ್ಲಿದ್ದು, ಈ ಮಧ್ಯೆ ಮಾನ್ಯ ನ್ಯಾಯಾಲಯವು ದಿನಾಂಕ:10-02-2022 ರಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತದೆ.<br><br>In the above circumstances, we request the state Government and all other stakeholders to reopen the educational |

| | | |
|---|---|---|
| | | institutes and allow the students to return to the classes at the earliest. Pending consideration of all these petitions, we restrain all the students regardless of the religion or faith from wearing saffron shawals (Bhagwa), scrafs, hijab, religious flags or the like within the classroom, until further orders.<br><br>We make it clear that this order is confirmed to such of the institutions wherein the college Development Committees have prescribed the students dress Code/ Uniform.<br><br>ಪ್ರಸ್ತುತ ಈ ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುವುದರಿಂದ. ಮಾನ್ಯ ಉಚ್ಛ ನ್ಯಾಯಾಲಯದ ಅಂತಿಮ ತೀರ್ಪು ಬಂದ ನಂತರ ಈ ಬಗ್ಗೆ ಪರಿಶೀಲಿಸಿ ಕ್ರಮವಹಿಸಲಾಗುವುದು. |

ಸಂಖ್ಯೆ: ಇಪಿ 15 ಡಿಜಿಡಬ್ಲ್ಯೂ 2022

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗೂ ಸಕಾಲ ಸಚಿವರು